ದಿವಂಗತ ಮಾನಾಧಿಕ ಸಾಧುವರ್ಯ

# ಅಮ್ಮೆಂಬಳ
# ಸುಬ್ರಾಯಪೈಗಳವರು

ನೊವೆಂಬರು 19
1852
ಪರಿಧಾವಿ,
ಕಾರ್ತಿಕ ಶು| ೮
ಶುಕ್ರವಾರ.



ಜುಲೈ 25
1909
ಸೌಮ್ಯ, ಅಧಿಕ
ಶ್ರಾವಣ ಶು| ೮
ರವಿವಾರ.

ಯದ್ಯದ್ವಿಭೂತಿಮತ್ಸತ್ವಂ । ಶ್ರೀಮದೂರ್ಜಿತಮೇವ ವಾ ॥
ತತ್ತದೇವಾವಗಚ್ಛ ತ್ವಂ । ಮಮ ತೇಜೋಽಂಶ ಸಂಭವಂ ॥
ಗೀತಾ ಅ. ೧೦-೪೧

---

ಮಂಗಳೂರು ಛಾಪಖಾನೆ,
ರಥಬೀದಿ, ಮಂಗಳೂರು.

1934.

# ಪ್ರಸ್ತಾವನೆ

ಜಗತ್ತಿನ ಕಲ್ಯಾಣಸಾಧನೆಗಾಗಿ ಆಗಾಗ ತಾನೇ ಅವತರಿಸುವುದೇ ಮಾತ್ರವಲ್ಲದೆ, ಮಹತ್ವವನ್ನುಳ್ಳುದರಲ್ಲೆಲ್ಲ ತನ್ನ ವಿಭೂತಿಯನ್ನು ಇರಿಸಿರುವೆನು ಎಂಬ ವಚನಗಳಿಗೆ ಯೋಗ್ಯ ಪ್ರಮಾಣಗಳನ್ನು ಪ್ರತ್ಯಕ್ಷವಾಗಿ, ಇಂದಿಗೆ 25 ವರ್ಷಗಳ ಹಿಂದೆ ನಮ್ಮ ಪ್ರಾಂತ್ಯದ ನಿವಾಸಿಗಳಿಗೆ ತೋರಿಸಿದ, ಆ ಭಗವಂತನನ್ನು ವಂದಿಸಿ, ಕೆಲಮಾತುಗಳನ್ನು, ಅಂತಹ ವಿಭೂತಿ ಪುರುಷರೊಬ್ಬರ ಲೀಲಾವತಾರವು ಮುಗಿದ ಕಾಲು ಶತಮಾನದ ರಜತೋತ್ಸವದ ಸಂದರ್ಭೋಚಿತವಾಗಿ ಇಲ್ಲಿ ಬರೆಯಲು ಪ್ರಯತ್ನಿಸುವೆವು.

ಮಹನೀಯರ ವಿಷಯ ಬರೆವಾಗ, ಅವರ ಜನ್ಮ-ಮರಣಗಳ ದಿನಗಳನ್ನಷ್ಟೆ ತಿಳಿದರೆ ಸಾಲದು. ಮರಣದ ದಿನವು ಜನ್ಮದಿನಕ್ಕಿಂತಲೂ ಅಧಿಕ ಮಹತ್ವವನ್ನುಳ್ಳುದೆಂಬ ಒಂದು ಗಾದೆಯೂ ಇರುವುದರಿಂದ ನಿಧನದ ಸ್ಮಾರಕವನ್ನೆ ಇತರರು ಆಚರಿಸಿದರೂ ತಪ್ಪಾಗದು. ಆದರೆ, ಮಹನೀಯರು, ಸಾಮಾನ್ಯರ ಹಾಗೆ ಮರಣ ಪಡೆವಂತಿಲ್ಲ. ಅವರ

ಕೀರ್ತಿಶರೀರವು, ನಶ್ವರವಾದ ಅವರ ಜಡದೇಹಕ್ಕಿಂತ ಬಹುಕಾಲ, ಶತಮಾನಗಳ ತನಕವೂ ತೇಜದಿಂದ ಸ್ಥಿರವಾಗಿ ಮೆರೆವುದುಂಟು. ಹೀಗಿರುವುದರಿಂದ ಅವರು ಚಿರಂಜೀವಿಗಳಾಗಿಯೆ ಬಾಳಿರುವಂತೆ ಸಾಮಾನ್ಯರು ಭಾವಿಸಲೇ ಬೇಕಾಗಿದೆ; ಅವರಿಗೆ ಅಮರತ್ವವು ಲಭಿಸುವುದು; ಅವರ ಕಾರ್ಯಕಲಾಪಗಳೇ ಅವರ ಸ್ಮಾರಕಗಳಾಗಿ ಬಾಳುವುವು. ಲೌಕಿಕದೃಷ್ಟಿಯಲ್ಲಿ ಅವರ ಮರಣದಿನವು, ಅವರು ಜಡದೇಹಧಾರಿಗಳಾಗಿದ್ದಾಗ ನಡಿಸಿದ ಜೀವನದ ಪರಿಣಾಮಫಲಗಳನ್ನು ಪ್ರದರ್ಶಿಸಲು ಅನುಕೂಲ ಸಂದರ್ಭವಾಗಿದ್ದು ಪುಣ್ಯತಿಥಿಯೆನಿಸಬಹುದು. ಆದರೆ, ಅವರ ಜನ್ಮದಿನವೇ, ಅವರ ದೆಸೆಯಿಂದಾಗಿ ಸಮಾಜದಲ್ಲುಂಟಾದ ಮನ್ವಂತರದ ಯುಗಾದಿಯನ್ನು ಸೂಚಿಸುವ ಕಾರಣ, ಆ ದಿನವನ್ನೆ ಅವರ ಚಿರಜೀವನದ ಆದಿ ದಿನವೆಂದು ಆಚರಿಸುವರು.

ನಮ್ಮ ಕಥಾನಾಯಕರ ಜನ್ಮದಿನೋತ್ಸವವನ್ನು ಅವರು ಸಂಸ್ಥಾಪಿಸಿದ ಸಂಸ್ಥೆಗಳಲ್ಲಿ ವರ್ಧಂತಿರೂಪವಾಗಿ ಪ್ರತಿವರ್ಷವೂ ಜರುಗಿಸುತ್ತಿರುವರು. ಕಾಲು ಶತಮಾನದಿಂದೀಚೆಗೆ ಪ್ರತಿವರ್ಷವೂ ಈ ದಿನಾಚರಣೆಯು ಹೆಚ್ಚು ಹೆಚ್ಚಾಗಿ ವಿಜೃಂಭಣೆಯಿಂದ ಜರಗುವುದು. ಇದರಿಂದ



ತಾನೆ ಅವರನ್ನು ಮಹನೀಯರೆಂದು ಸಮಾಜವೂ ಅಂಗೀಕರಿಸಿ ಆದರಿಸುತ್ತ ಮನ್ನಣೆಗೊಡುತ್ತಿರುವುದೆಂದು ಸ್ಪಷ್ಟವಾಗುತ್ತಿದೆ. ಈ ದಿನಗಳಲ್ಲಿ, ಬೆಳಗ್ಗಿನ ವೃತ್ತಾಂತಗಳು ಸಂಜೆಯೊಳಗೆ ಮರೆತು, ಯಥಾರ್ಥವಾಗಿಯೂ ಭೂತಕಾಲದೊಳಗೆ ಭುಕ್ತವಾಗುವ ರೂಢಿಯಿರುವಾಗ, ಇವರ ಸ್ಮರಣೆಯು ಈ ರೀತಿಯಾಗಿ ಅಚ್ಚಳಿಯದೆ, ಈಗಲೂ ಬಹುದೂರದ ವರೆಗೆ ಮುಂದೆಯೂ ಇರುವಂತೆ, ಇವರ ಅಮೋಘವಾದ ಜೀವಿತಕಾಲದಲ್ಲಿ ಇವರು ನಡೆಸಿದ ಮಹತ್ಕಾರ್ಯಗಳೂ ಅಪೂರ್ವವಾದ ಕೃತಿಗಳೂ ಧಾರಾಳವಿರಬೇಕು. ಅವನ್ನೀಗ ಸಂಕ್ಷೇಪವಾಗಿ ಅವರ ಇಹಜೀವನದ ವೃತ್ತಾಂತದೊಡನೆ ವಿವರಿಸುವೆವು.



All, that he came to give,
He gave, and went again;
I have seen one man live,
I have seen one man reign,
With all the graces in his train.

As one of us, he wrought
Things of the common hour;
Whence was the charmed soul brought,

That gave each act such power.—
The natural beauty of a flower?

Magnificence and grace
Excellent courtesy:
A brightness on the face
Airs of high memory:
Whence came all these, to such as he?

With a light word, he took
The hearts of men in thrall:
And with a golden look
Welcomed them, at his call,
Giving their love, their strength, their all.

Weary, the cares, the jars,
The lets, of every day,
But the heavens filled with stars,
Chanced he upon the way:
And where he stayed, all joy would stay.

* * * * * * * *

All that he came to give
He gave: and I, who sing
His praise, bring all I have to sing.

—**Lionel Johnson.**

ದಿವಂಗತ

## ಅಮ್ಮೆಂಬಳ ಸುಬ್ರಾಯ ಪೈಗಳು.

ಒಂದು ನೂರು ವರ್ಷಗಳ ಹಿಂದೆ ನಮ್ಮ ಜಿಲ್ಲೆಯ 'ಮೂಲ್ಕಿ' ಎಂಬ ಊರು ಈಗಣಿಗಿಂತ ಹೆಚ್ಚಿನ ಹೆಸರುಳ್ಳುದಾಗಿದ್ದಿತು. ಆಗ ಅದಕ್ಕೆ ಮೂಲಿಕಾಪುರ ಎಂಬ ಹೆಸರು ಈಗ ಸಲ್ಲುವುದಕ್ಕಿಂತ ಚೆನ್ನಾಗಿ ಒಪ್ಪುತ್ತಿದ್ದಿತು. ಅಲ್ಲಿ ಸರಕಾರದ ಕೋರ್ಟು ಕಚೇರಿಗಳೂ ಹಿಂದಣ ಮನ್ನಣೆಯ ರಾಜತ್ವದ ಮತ್ತು ಇತರ ಮನೆತನಗಳೂ ಚೆನ್ನಾಗಿ ಮೆರೆದಿದ್ದುವು. ಗೌಡಸಾರಸ್ವತ ಬ್ರಾಹ್ಮಣ ಸಮುದಾಯವು ಆಗ ಇನ್ನಷ್ಟು ಸಂಪನ್ನ ಸ್ಥಿತಿಯಲ್ಲಿದ್ದಿತು. ನವೀನ ಶಿಕ್ಷಣಕ್ಕೆ ಕೈಹಚ್ಚಿದವರು ಅಷ್ಟಿರಲಿಲ್ಲ. ಆದರೆ, ಅದರ ಸದುಪಯೋಗವನ್ನು ತಿಳಿದುಕೊಂಡವರೊಳಗೆ ನಮ್ಮ ಕಥಾನಾಯಕರ ಹಿರಿಯರಾದ ಶ್ರೀ। ಉಪೇಂದ್ರ ಪೈಯವರು ಒಬ್ಬರಾಗಿದ್ದರು. ಇವರು ವಕೀಲರು, ಸನ್ಮಾನ್ಯರು. ವಕೀಲರೆಂದೇ ಸನ್ಮಾನ್ಯರಾಗಿದ್ದವರಲ್ಲ; ಉತ್ತಮ ಮನೆತನದವರೂ, ಉತ್ತಮ ಧ್ಯೇಯವುಳ್ಳವರೂ ಆಗಿದ್ದ ಸನ್ಮಾನ್ಯ ವಕೀಲರಾಗಿದ್ದರು. ಇವರಲ್ಲಿ ನಾಲ್ವರು ಪುತ್ರರತ್ನಗಳಾ

ದುವು. ಮೊದಲನೆಯವರಾದ ಶ್ರೀ। ನಾರಾಯಣ ಪೈಯ
ವರು ವಕೀಲರಾಗಿಯೇ ಇದ್ದು, ೧೯೦೮ರಲ್ಲಿ ಸ್ವರ್ಗಸ್ಥರಾ
ದರು. ಎರಡನೆಯವರು ಶ್ರೀ। ವಾಸುದೇವ ಪೈಯವರು;
ಇವರು ಮಂಗಳೂರು ಹಜೂರು ಆಫೀಸಿನಲ್ಲಿ, ರೆವಿನ್ಯೂ
ಗುಮಾಸ್ತರಾಗಿ ಕೆಲಸವನ್ನು ಕೈಕೊಂಡು, ಕೊನೆಗೆ ಕರ
ಣೀಕರಾಗಿ, ಹಲವು ಕಲ್ಲೆಕ್ಟರರ ಮುಖ್ಯಮಂತ್ರಿಗಳೆನಿಸಿ
ಕೊಂಡು, ಕರಣೀಕರೆನಿಸುವವರಿಗೆಲ್ಲ ಆದರ್ಶರಾಗಿ ಉದ್ಯೋಗ
ನಡೆಸಿ, ಬಹುಮಾನಿತರಾಗಿ, ಪೆನ್ಶನು ಪಡೆದು, ಅವಕಾಶ
ವನ್ನೆಲ್ಲ ಬಡವರ ಸಹಾಯಕ್ಕೋ, ಮ್ಯುನಿಸಿಪಾಲಿಟಿ, ಜಿಲ್ಲಾ
ವ್ಯಾವಸಾಯಿಕ ಸಂಘಕ್ಕೋ ವಿನಿಯೋಗಿಸಿ, ಕೊನೆಗೆ
ಜನೋಪಕಾರಿಗಳೆಂದೂ, ರಾಜಕಾರ್ಯಪ್ರಸಕ್ತರೆಂದೂ
ಬಹು ದುರ್ಲಭವಾದ ಆ ಶ್ರೇಯಸ್ಸನ್ನು ಪಡೆದು, ದಿವಂಗತ
ರಾದರು. ಮೂರನೆಯವರಾದವರು ಗೌಡಸಾರಸ್ವತರಲ್ಲೆಲ್ಲ
ಮೊದಲನೆ ದಿವಾನ ಬಹದ್ದೂರರು, ಮೊದಲನೆ ಜಿಲ್ಲಾ
ಜಡ್ಜರು ಎಂದು ಹೆಸರ್ಗೊಂಡ ದಿವಾನ ಬಹದ್ದೂರ ಶ್ರೀ।
ವೆಂಕಟರಮಣ ಪೈಯವರು. ಸತ್ಯಸಂಧರೂ, ವಿನಯ
ಸಂಪನ್ನರೂ ಎಂದು ಇವರನ್ನು ಕಂಡವರು ಕೊನೆಯ
ತನಕವೂ ಕೊಂಡಾಡದೆ ಇಲ್ಲ. ಈ ಭ್ರಾತೃಚತುಷ್ಟಯ
ದಲ್ಲಿ ಕೊನೆಯವರು ಈ ಚಿಕ್ಕ ಲೇಖದ ನಾಯಕರಾಗಿರುವ



ಶ್ರೀ। ಸುಬ್ರಾಯ ಪೈಯವರು. ಇಂತಹ ನಾಲ್ವರು ಸತ್ಪುತ್ರ
ರನ್ನು ಹೆತ್ತ ಮಾತಾಪಿತರು ಧನ್ಯರೆಂದು ಪುನಃ ಹೇಳ
ಬೇಕೆ? ನಾಲ್ವರು ನಾಲ್ಕು ದೇಹಗಳಲ್ಲಿದ್ದರಾದರೂ, ಇವರ
ಆತ್ಮಗಳು ಒಂದೇ ಜ್ಯೋತಿಯಿಂದ ಕೂಡಿ, ನೀಲಾಂಜನದ
ನಾಲ್ಕು ಜ್ಯೋತಿಗಳಂತೆ, ಪರಮಾತ್ಮನ ಪಾದಾರತಿಯನ್ನು
ಒಂದೇ ಸವನೆ ಬೆಳಗುತಿದ್ದುವು. ಒಡಹುಟ್ಟುಗಳೊಳಗೆ
ಈ ಬಗೆಯ ಪ್ರೇಮವೂ, ಐಕ್ಯವೂ, ವಾತ್ಸಲ್ಯವೂ, ಸದ್ಗುಣ
ಪ್ರಭಾವವೂ ತೀರ ಕಡಿಮೆ. ಇವರ ಆದರ್ಶ ವರ್ತನವು
ಸಮಾಜದಲ್ಲಿ ಅಪರೂಪವಾಗಿದೆ ಎಂಬುದರಿಂದಲೇ ಸರ್ವ
ತ್ರವೂ ಅನುಸರಣೆಗೆ ಸದಾ ಪಾತ್ರವಾಗಿದೆ.

ಮುಖಪತ್ರದಲ್ಲಿ ಹೇಳಿರುವಂತೆ ಶ್ರೀ। ಸುಬ್ಬರಾಯ
ಪೈಯವರು ೧೮೮೫ನೆ ಇಸ್ವಿಯಲ್ಲಿ ಮೂಲಿಕೆಯಲ್ಲಿ ಜನ್ಮ
ಗ್ರಹಣಮಾಡಿದರು. ಇವರ ಶೈಶವಕಾಲದಲ್ಲಿ ಇವರ
ಮಾತೋಶ್ರೀಯವರು ಅನಾರೋಗ್ಯದಿಂದ ಇರುತ್ತಿದ್ದ
ಕಾರಣ, ಇವರ ಲಾಲನೆಪಾಲನೆಗಳ ಭಾರವು ಇವರ ಅಗ್ರ
ಜರ ಪತ್ನಿಯವರ ಮೇಲೆಯೇ ಬಿದ್ದಿತು. ಅವರ ಅಭಿ
ಪ್ರಾಯದಲ್ಲಿ ಬಾಲಕ ಸುಬ್ಬರಾಯನು ಪಾಟಗಳ ಕಡೆಗೆ
ಇಡುತ್ತಿದ್ದುದಕ್ಕಿಂತ, ಆಟಗಳ ಕಡೆಗೂ ಲೂಟಿಗಳ
ಕಡೆಗೂ ಹೆಚ್ಚಿನ ಮನಸ್ಸು ಕೊಡುತ್ತಿದ್ದನೆಂದು ತಿಳಿದು

ಬರುವುದು. ಸುಮಾರು ೯—೧೦ ವಯಸ್ಸಿನ ತನಕ ಸುಬ್ಬ ರಾಯನು ಪಾಠಗಳಲ್ಲಿ ಮುಂದರಿದುದೇ ಇಲ್ಲ ಎನ್ನಬಹುದು. 'ಸಾಧುಗೋಪಾಲ'ರಂತೆ 'ಒಳ್ಳೇ ಮಕ್ಕಳಾಗಿ' ಕಿಂಚಿತ್ತೂ ಆಟವಿಲ್ಲದೆ ಇರುವ ಬಾಲಕರಿಗಿಂತ, ಸ್ವಲ್ಪ ಸಹಜವಾದ ತಂಟೆಯ ಚಾಳಿಯುಳ್ಳ ಮಕ್ಕಳೇ, ಮುಂದೆ ತುಂಬ ಚಟು ವಟಿಕೆಯುಳ್ಳವರಾಗಿ ಯೋಗ್ಯರ ಕೈಯಲ್ಲಿ ಅತಿ ಯೋಗ್ಯತೆ ಯನ್ನು ತಳೆವ ವಿದ್ವಾಂಸರಾಗುವರೆಂಬುದು ತಿಳಿದೇ ಇರುವ ವಿಚಾರವಾಗಿದೆ. ಹತ್ತನೆಯ ವರ್ಷ ಕಳೆದ ಬಳಿಕವೇ ಈ ಬಾಲಕನು ತಟಕ್ಕನೆ ಬೇರೆ ಪ್ರಕೃತಿಯುಳ್ಳವನೆಂಬಂತೆ, ಇಡೀ ವರ್ಗದೊಳಗಣ ಎಲ್ಲ ಮಕ್ಕಳನ್ನು ಹಿಂದಕ್ಕೆ ತಳ್ಳಿ, ಒಂದೇ ವರ್ಷದಲ್ಲಿ ಎರಡು ಕ್ಲಾಸುಗಳನ್ನು ದಾಟಿ, ಉತ್ತಮ ರೀತಿಯಲ್ಲಿ ಉತ್ತೀರ್ಣನಾದನು. ತೀರ್ಥರೂಪರ ಜಾಗ್ರತೆ, ಸ್ವತಃ ತನ್ನಲ್ಲಿ ಮೊಳೆದ ವಿದ್ಯಾಭಿರುಚಿ ಇವೆರಡರಿಂದ ಹದಿ ನಾರನೆಯ ವಯಸ್ಸಿನಲ್ಲಿ ಮೆಟ್ರಿಕ್ಯ್ಯುಲೇಶನ್ (೧೮೬೮ರಲ್ಲಿ) ಪರೀಕ್ಷೆಯಲ್ಲಿ ಉತ್ತೀರ್ಣನಾಗಿ, ಮುಂದೆ ೧೮೭೦ರಲ್ಲಿ ಬರೇ ೧೮ನೆಯ ವಯಸ್ಸಿನಲ್ಲಿ (ಆ ಕಾಲದಲ್ಲಿ ಇದು ವಿಚಿತ್ರ) ಮದ್ರಾಸಿಗೆ ತೆರಳಿ ಪ್ರೆಸಿಡೆನ್ಸಿ ಕೊಲೆಜಿನಲ್ಲಿ ಬಿ. ಎ. ತರಗತಿ ಯನ್ನು ಸೇರಿದನು.

ಆ ಕಾಲದಲ್ಲಿ ಗೌಡಸಾರಸ್ವತ ಸಮಾಜದಲ್ಲಿ ಇಂಗ್ಲಿಷ ವಿದ್ಯಾಭ್ಯಾಸಕ್ಕೆ ಮನಕೊಟ್ಟವರೊಳಗೆ ಇವರೂ, ಇವರ



ಆಜೀವಮಿತ್ರರಾಗಿದ್ದ **ರಾವ್ ಸಾಹೆಬ್ ಮಂಗಳೂರು ಗೋಪಾಲ ಪೈಯವರೂ** ಮೊದಲನೆಯವರೆನ್ನಬಹುದು. ಕೆಲವರಾದರೂ, ಇವರ ಪ್ರಗತಿಯನ್ನು ನೋಡಿ, ಇವರು ನಡೆದ ದಾರಿಯಲ್ಲೆ ಮುಂದೆ ಹೆಜ್ಜೆ ಇಡುವರೆ, ಇವರೇ ಪಥಪ್ರದರ್ಶಕರಾದರು. ೧೮೭೬ರಲ್ಲಿ ಬಿ. ಎಲ್. ತನಕವೂ ಓದಿ, ಉತ್ತೀರ್ಣರಾಗಿ, ಪದವಿ ಗಳಿಸಿಕೊಂಡು, ಮದ್ರಾಸಿ ನಲ್ಲಿಯೆ ಇರುತ್ತಿದ್ದರು. ಮದ್ರಾಸಿನಲ್ಲಿ ಕೊಲೆಜ್ ಶಿಕ್ಷಣ ಹೊಂದುತ್ತಿರುವಾಗ, ಇವರು ನಿತ್ಯವೂ ದೇವಪೂಜೆಯನ್ನು ಮಾಡುತ್ತಿದ್ದರು. ಮನೇದೇವರಿಗೆನಿತ್ಯಪೂಜೆಯನ್ನು ಮಾಡುವ ಶಾಸ್ತ್ರೀಯ ಆಗಮ ಕ್ರಮವನ್ನು ಇವರು ಕಲಿತುಕೊಂ ಡಿದ್ದು, ಸಾಲಗ್ರಾಮವೊಂದನ್ನು ತನ್ನ ಪಠ್ಯಪುಸ್ತಕಗಳೊಡನೆ ಮದ್ರಾಸಿಗೆ ಕೊಂಡೊಯ್ದು, ಬೆಳಗ್ಗೆಯೂ ಸಂಜೆಯೂ ಬಹಳ ಸಮಯವನ್ನು ಈ ದೇವರಪೂಜೆಯಲ್ಲೇ ವಿನಿಯೋ ಗಿಸುತ್ತಿದ್ದರು. ಈ ತೆರದಲ್ಲಿ ಸಮಯ ನಷ್ಟವಾಗುತ್ತಿರು ವುದು ಅವರ ಮಿತ್ರ ಗೋಪಾಲರಾಯರಿಗೆ ಸರಿದೋರಲಿಲ್ಲ. ಅವರು ಈ ಪೂಜಾಸರಂಜಾಮುವನ್ನೆಲ್ಲ ಒಂದು ದಿನ ಬಾವಿಗೇ ಒಗೆದುಬಿಟ್ಟರು! ಸುಬ್ಬರಾಯರು ಇದನ್ನು ಸಂಜೆಯಲ್ಲಿ ತಿಳಿದು ಬಹಳ ಕೋಪಗೊಂಡರೂ, ಮಿತ್ರರ ವರ್ತನೆಯ ವಿಷಯದಲ್ಲಿ ವಿಚಾರಮಾಡುತ್ತ, "ಚೆನ್ನಾಯಿತು. ನನ್ನ

ಪೂಜೆಯ ಆಡಂಬರವೂ, ರಗಳೆಯೂ ಇಲ್ಲದೆಯೆ, ಸಾಲಗ್ರಾಮವು ಸದಾ ಸರ್ವದಾ ಜಲಾಧಿವಾಸವನ್ನು ಹೊಂದಿ ತೃಪ್ತವಾಗಿರುವಂತಾಯಿತು!" ಎಂದರು. ಬಳಿಕ, ಹಿಂದಣ ಪೂಜೆಯ ಸಮಯವೆಲ್ಲ ಪಾಟಕ್ಕಾಯಿತು. ಸುಬ್ರಾಯರು ಬಿ. ಎ. ಯಲ್ಲಿ ಇಡೀ ಸಂಸ್ಥಾನದಲ್ಲಿ ಎರಡನೆಯವರಾಗಿ ಉತ್ತೀರ್ಣರಾದರು.

ಮದ್ರಾಸಿನಲ್ಲಿದ್ದಾಗ ಇವರ ಆರೋಗ್ಯವು ಬಹಳ ಚೆನ್ನಾಗಿದ್ದಿತು; ಮುಂದೆ ತಲೆದೋರಿದ ವಾತಬಾಧೆಯ ಕುರುಹೂ ಆಗ ಕಂಡುಬಂದುದಿಲ್ಲ. ಬಿ. ಎ. ಮುಗಿಸಿ ಬಿ. ಎಲ್. ತರಗತಿಗೆ ಸೇರುವ ಮೊದಲು ಒಂದು ವರ್ಷ ಇವರು ಮನೆಯಲ್ಲಿಯೇ ಇದ್ದು, ಮಿತ್ರರು ಕೆಲವರು ಸ್ಥಾಪಿಸಿದ್ದ ಒಂದು ಮೂಲಪಾಠಶಾಲೆಯಲ್ಲಿ ಮಕ್ಕಳಿಗೆ ಪಾಟ ಹೇಳಿಕೊಡುತ್ತಿದ್ದರು. ಇವರು ಹಾಲನ್ನೇ ಬಹಳವಾಗಿ ಕುಡಿಯುತ್ತಿದ್ದು ಸಿಕ್ಕ ಅವಕಾಶವನ್ನೆಲ್ಲಾ ಅಧ್ಯಯನದಲ್ಲೇ ವಿನಿಯೋಗಿಸುತ್ತಿದ್ದರು. ಅವರ ಮುಖದಲ್ಲಿ ಯಾವಾಗಲೂ ಏಕಾಂತದಲ್ಲಿ ಒಂದು ಬಗೆಯ ಖಿನ್ನತೆಯ ಕುರುಹು ಇರುತ್ತಿದ್ದರೂ, ಸಂಭಾಷಣೆಯಲ್ಲಿ ಅವರು ವಿನೋದಪ್ರಿಯರಾಗಿ ಬಹಳ ಚತುರರೂ ಕುಶಲರೂ ಆಗಿದ್ದರು. ಈ ದೆಸೆಯಿಂದ ಇವರಿಗೆ ಸಂಭಾವಿತರ ಗೆಳೆತನವು ಚಿರಕಾಲಕ್ಕೂ ದೊರೆ



ತಿದ್ದಿತು. ಮುಂದೆ ಇಂತಹ ಅವರ ಸನ್ಮಿತ್ರರ ಮೂಲಕವಾಗಿ ತನ್ನನ್ನು ಹಗೆಮಾಡುತ್ತಿದ್ದವರನ್ನು ಸಹ ಅವರು ಉಪಕಾರಮಾಡಿಸಿಕೊಟ್ಟು, ಹಗೆಯನ್ನು ಗೆಳೆಯನನ್ನಾಗಿ ಮಾರ್ಪಡಿಸಿಕೊಂಡುದೇ ಅಲ್ಲದೆ, ಮಿತ್ರತ್ವದ ಸಂಪೂರ್ಣ ಉಪಯೋಗ ಮಾಡಿಕೊಳ್ಳುತ್ತಿದ್ದರು. ಇವರ ಬೋಧಕರಾಗಿದ್ದ ಪ್ರಿನ್ಸಿಪಾಲ್ ಥೊಮ್ಸನ್, ಡಾ। ಡಂಕನ್, ಟಿ. ಗೋಪಾಲರಾವ್, ರಂಗನಾಥಮ್ ಮುದಲಿಯಾರ್ ಎಂಬವರು ಸಂಸ್ಥಾನದಲ್ಲೆಲ್ಲಾ ಹೆಸರ್ಗೊಂಡ ಮಹೋಪಾಧ್ಯಾಯರಾಗಿದ್ದರು; ಇವರಲ್ಲಿ ಸುಬ್ರಾಯರವರು ಯಾವಾಗಲೂ ವಿನಯದಿಂದಲೂ ಭಕ್ತಿಯಿಂದಲೂ ನಡೆದುಕೊಳ್ಳುತ್ತಿದ್ದರು. ಆ ಗುರುಗಳೂ ಇವರನ್ನು ಕೊನೆಯತನಕವೂ ಮರೆಯಲಾರದಿದ್ದರು. ಪಾಠಕಾಲದಲ್ಲಿ ಲೆಕ್ಚರುಗಳನ್ನು ತುಂಬಾ ಏಕಾಗ್ರಚಿತ್ತರಾಗಿ ಕೇಳಿಕೊಂಡು, ಮನೆಗೆ ತೆರಳಿ ಸಂಕ್ಷಿಪ್ತರೂಪದಲ್ಲಿ ವಿಷಯಗಳನ್ನು ಬರೆದಿಟ್ಟುಕೊಳ್ಳಬೇಕೆಂದೂ ಬೋಧನೆಯಾಗುತ್ತಿರುವಾಗ ಅಲ್ಲಲ್ಲಿ ಆಗಾಗ ಬರೆದುಕೊಳ್ಳುವುದು ಅತಿ ಕೆಡುಕಿನ ದುರಭ್ಯಾಸವೆಂದೂ ಇವರು ಮಿಕ್ಕ ವಿದ್ಯಾರ್ಥಿಗಳಿಗೆ ಸಾರುತ್ತಿದ್ದರು. ಬೇಕಾಗುವಷ್ಟು ಮೂಲಗ್ರಂಥಗಳನ್ನು ಓದುತ್ತಿರುವುದೇ ವಿದ್ಯಾರ್ಥಿಗಳಿಗೆ ಹಿತಕರವಾದುದು ಹೊರತಾಗಿ, 'ನೋಟ್ಸು'ಗಳನ್ನು

ಪರೀಕ್ಷೆಗಾಗಿ ಓದಿಕೊಂಡು ಮೂಲಗ್ರಂಥಗಳ ಕಡೆಗೆ ದುರ್ಲಕ್ಷ್ಯವನ್ನಿಡುವುದು ಹಾಳೆಂದು ಇವರ ಅಭಿಪ್ರಾಯವಾಗಿದ್ದಿತು. ಯಾವಾಗಲೂ ವಿದ್ಯಾರ್ಥಿದಶೆಯಲ್ಲಿದ್ದಾಗಲೂ ಅನಂತರವೂ ಇವರು ಆಯಾ ಕಾಲದಲ್ಲಿ ಪ್ರಕಟವಾದ ಅತ್ಯಮೂಲ್ಯ ನವೀನ ಗ್ರಂಥಗಳನ್ನು ಮನನಮಾಡುತ್ತ, ಅವನ್ನು ಅತಿತ್ವರೆಯಾಗಿ ಓದುತ್ತಲೂ ಬಲು ಸೂಕ್ಷ್ಮವಾದ ವಿಷಯವನ್ನಾದರೂ ನೆನಪಿನಲ್ಲಿಟ್ಟುಕೊಳ್ಳುತ್ತಲೂ ಇರುತ್ತಿದ್ದರು. ಅದು ಕಾರಣವೇ ಇವರಲ್ಲಿ ವಿಷಯಗ್ರಹಣಶಕ್ತಿಯು ಬಹಳ ಚೆನ್ನಾಗಿದ್ದಿತು; ಸೂಕ್ಷ್ಮವಿಚಾರಶಕ್ತಿಯೂ ನಿಜವಾದ ವಿಮರ್ಶಾಧಿಕಾರವೂ ಇವರಲ್ಲುಂಟಾದುವು. ನಿರ್ದಿಷ್ಟವಾದ ಸಮಯದಲ್ಲಿ ಕ್ಲಪ್ತವಾದ ಕೆಲಸವನ್ನು ಎಡೆಬಿಡದೆ ಮಾಡುತ್ತಿದ್ದರೆ, ಅಲ್ಪಕಾಲದಲ್ಲಿ ಧಾರಾಳವಾದ ಕಾರ್ಯಗಳನ್ನು ನೆರವೇರಿಸಬರುವುದೆಂದೂ, ಹಲವು ದಿನಗಳವರೆಗೆ ಸಿಕ್ಕಿದಾಗೆಲ್ಲ ಕೆಲಸಮಾಡುವ ದುಃಸ್ವಭಾವದಿಂದ ಯಾವ ಕೆಲಸವೂ ಸಕಾಲದಲ್ಲಿ ಸಾಗದೆ ಅತೃಪ್ತಿಗೇ ಕಾರಣವಾಗುವುದೆಂದೂ ಅವರ ಅಧ್ಯಯನ ಕಾಲದ ಅನುಭವವಾಗಿದೆ.

ಮದ್ರಾಸಿನಲ್ಲಿ ವಕಾಲತ್ತು ನಡೆಸುತ್ತ ಇರುವಾಗ ಹೈಕೋರ್ಟು ಜಡ್ಜರಾಗಿದ್ದ ಮೆ। ಹೊಲ್ಲೊವೆಯವರ ಆಪ್ತ



ಬಂಧುಗಳಾಗಿದ್ದರು. ಪ್ರತಿ ಶನಿವಾರವೂ ಅವರಲ್ಲಿಗೆ ತೆರಳಿ, ಅಲ್ಲಿ ನೆರೆಯುತ್ತಿದ್ದ ಇತರ ಅವರ ಆಪ್ತೇಷ್ಟರೊಡನೆ ಇವರು ಸಂಭಾಷಿಸುತ್ತಿದ್ದು, ಬಹಳ ಲೋಕಾನುಭವವನ್ನು ಪಡೆದರು. ವಕಾಲತ್ತಿನ ತರಬೇತಿಗೆ ಮುಂದೆ ಹೈಕೋರ್ಟು ಜಡ್ಜರಾಗಿದ್ದ ಮೆ। ಶೆಪರ್ಡ್ ದೊರೆಗಳಲ್ಲಿಯೇ ಇವರು ಆಶ್ರಯಪಡೆದಿದ್ದರು. ಅದೇ ಕಾಲದಲ್ಲಿ ಇವರ ತೀರ್ಥರೂಪರು ದಿವಂಗತರಾದರು (1876). ಆ ವಾರ್ತೆಯು ಇವರ ಕೋಮಲಾಂತಃಕರಣವನ್ನು ವ್ಯಥೆಪಡಿಸುವುದಾಗಿ ಸೋದರರು ಭಾವಿಸಿ, ವಿಶೇಷ ಕಾಹಿಲೆಯ ವಾರ್ತೆಯನ್ನಷ್ಟೆ ಅವರಿಗೆ ತಂತೀಮೂಲಕ ತಲಪಿಸಿದರು. ಮದ್ರಾಸಿನಿಂದ ಸುಬ್ಬರಾಯರು ಹಿಂತೆರಳಿ ಮನೆಗೆ ಬಂದು ಅಲ್ಲಿ ತಮ್ಮ ತೀರ್ಥರೂಪರ ಆಸನವು ಪರಿತ್ಯಕ್ತವಾಗಿದ್ದುದನ್ನು ಕಂಡ ಬಳಿಕವೇ, ಅವರ ನಿಧನದ ದುಃಖವಾರ್ತೆಯನ್ನು ತಿಳಿದುಕೊಳ್ಳುವಂತಾಯಿತು. ಇದರಿಂದ ಅವರಲ್ಲಿ ಉಂಟಾಗಿದ್ದ ಸಂತಾಪವನ್ನು, ಆ ಪ್ರಸ್ತಾಪವನ್ನು ಎತ್ತಿದಾಗಲೆಲ್ಲ ಅವರು ಏಳೆಂಟು ವರ್ಷಗಳ ನಂತರವೂ ಕಣ್ಣೀರು ಸುರಿಸಿ ವ್ಯಕ್ತಗೊಳಿಸುತ್ತಿದ್ದರು.

ಅಲ್ಲಿಗೆ ಮದ್ರಾಸ್ ಹೈಕೋರ್ಟಿಗೂ ಅವರಿಗೂ ಇದ್ದ ಉದ್ಯೋಗ ಸಂಬಂಧವು ಕಡಿಯಿತು. ಮಂಗಳೂರಲ್ಲೇ

ಅವರು ಹಿರಿಯರ ಉದ್ಯೋಗವನ್ನೇ ಕೈಕೊಂಡರು. ಅದೂ
ಒಂದು ಬಗೆಯಾಗಿ ಮಂಗಳೂರಿಗೆ ಹಾಗೂ ಈ ಜಿಲ್ಲೆಗೆ
ಉಪಕಾರಕರವಾಗಿಯೇ ಪರಿಣಮಿಸಿತು. ಮಹಾವಿಷ್ಣುವು
ವೈಕುಂಠದಿಂದ ಇಳಿದು ಗೋಕುಲದಲ್ಲಿ ಕಾಲಿಟ್ಟಂತಾಯಿ
ತೆಂದು ಮುಂದಣ ವೃತ್ತಾಂತವನ್ನು ತಿಳಿದ ಮುಗ್ಧರು
ಆಡುವುದುಂಟು. ಇಲ್ಲಿ ಅವರು ವಕಾಲತ್ತನ್ನು ವಹಿಸಿ
ದಾಗಲೇ ಒಂದು ಕ್ರಿಮಿನಲ್ ಮೊಕದ್ದಮೆಯನ್ನು ವ್ಯವ
ಹರಿಸಿ ಮನೆಗೆ ಬರಲು, ಕಕ್ಷಿಗಾರನಿಗೆ ಟಾಪುಫಿತ್ತೈ ದೊರೆ
ಯಿತು. ಅವನ ಹೆಂಡತಿಯೂ ಬಳಗವೂ ಇವರ ಕಾಲಬುಡದಲ್ಲಿ
ಗೋಳಿಟ್ಟಿತು. ಆದರಿಂದಾಗಿ ಮುಂದೆ ಎಂದಿಗೂ ಕ್ರಿಮಿನಲ್
ವ್ಯವಹರಣೆಯನ್ನು ವಹಿಸಿಕೊಳ್ಳುವುದಿಲ್ಲವಾಗಿ ಇವರು
ಪ್ರತಿಜ್ಞೆ ಮಾಡಿಕೊಂಡರು. ಸತ್ಯವೊಂದು ಕಡೆ, ಸಾಕ್ಷ್ಯ
ವೊಂದು ಕಡೆಯಾಗಿ ವ್ಯವಹರಣೆಯು ದಾರಿಗೆಟ್ಟು, ನ್ಯಾಯವು
ಸಿಗುವುದು ದುರ್ಲಭವಾಗಬಹುದಾದ ಕ್ರಿಮಿನಲ್ ವ್ಯವ
ಹರಣೆಗಳನ್ನು ಕೊನೆಯ ತನಕವೂ ಇವರು ಅಂಗೀಕರಿಸಲಿಲ್ಲ.

ಗೌರವಭರಿತವಾದ ವಿಗ್ರಹ, ಖಂಡಿತವಾಗಿಯಾದರೂ
ವಿನಯದಿಂದ ಶಾಂತವಾಗಿ ಹೊರಡುವ ನುಡಿ, ಆ ವಿನೋದ
ಮಯವೂ ವಿವೇಕಪೂರ್ಣವೂ ಆದ ಶೈಲಿ, ಸಂಪೂರ್ಣಸಿದ್ಧತೆ,
ನ್ಯಾಯವಿಚಾರಗಳ ಸಮಗ್ರಜ್ಞಾನ ಮೊದಲಾದುವು ಇವರಿಗೆ



ಅಲಂಕಾರಗಳಾಗಿದ್ದ ಕಾರಣ ಕಕ್ಷಿಗಾರರ ಮನಸ್ಸು ಇವರಲ್ಲಿ
ತದೇಕಭಕ್ತಿಯಿಂದಲೂ ವಿಶ್ವಾಸದಿಂದಲೂ ನೆಲೆಗೊಂಡಿ
ದ್ದುದು ವಿಚಿತ್ರವೆ? ಇಂಗ್ಲಿಷ್ ಕನ್ನಡ ತುಳು ಕೊಂಕಣಿ,
ಯಾವ ಭಾಷೆಯಲ್ಲಾದರೂ ಒಂದೇ ಪ್ರಕಾರವಾದ ವಾಗ್ಮಿ
ಗಳು; ಒಮ್ಮೆ ರಿಕಾರ್ಡನ್ನು ನೋಡಿದರೆಂದರೆ ಆರು ತಿಂಗಳ
ನಂತರವೂ ಅದರ ಆಧಾರವನ್ನು ಹಿಡಿದು ವಾದಿಸಬಲ್ಲ
ಸ್ಮರಣಶಕ್ತಿಯುಳ್ಳವರು; ಇಷ್ಟೆಲ್ಲಾ ವಿದ್ಯಾಸಂಪತ್ತುಳ್ಳ
ವಕೀಲರು ಯಾವ ಕಾಲದಲ್ಲೂ ದೊರೆವುದು ಕಕ್ಷಿಗಾರರ
ಪುಣ್ಯವೇ ಎನ್ನಬೇಕು.

ವಕಾಲತ್ತು ನಡೆಸಿ ಬರುತ್ತಿರುವುದರೊಳಗೆ ಸ್ವಜಾತಿ
ಯಲ್ಲಿ ಒಂದು ಧರ್ಮಾಚಾರ ಸಂಬಂಧವಾಗಿ ವ್ಯಾಜ್ಯ
ಮೊಳೆಯಿತು. ಅಲ್ಪ ತಪ್ಪಿಗಾಗಿ ಜಾತಿಯನ್ನೆ ಕಳೆದುಕೊಳ್ಳ
ಬೇಕಾಗಿ ಬಂದವನೊಬ್ಬನನ್ನು ಆಗ ಗೌಡಸಾರಸ್ವತ
ಬ್ರಾಹ್ಮಣವೃಂದದ ಪರಮ ಪೂಜ್ಯ ಗುರುಗಳಾಗಿದ್ದ
ಶ್ರೀಮದ್ಭುವನೇಂದ್ರ ತೀರ್ಥಶ್ರೀಪಾದಂಗಳವರು ಪುನಃ
ಪ್ರಾಯಶ್ಚಿತ್ತ ಮೂಲಕ ಜಾತಿಗೆ ಸೇರಿಸಿಕೊಂಡರೆಂಬ
ಆದೊಂದು ಕ್ಷುದ್ರ ಕಾರಣದಿಂದ ಸಮಾಜಿಕರಲ್ಲಿ ಇತ್ತಂಡ
ಗಳುಂಟಾಗಿ, ವ್ಯವಹರಣೆಗಳು ಮೊಳೆಯಲು, ಶ್ರೀಪಾದಂಗ
ಳವರು ಶ್ರೀ ಸುಬ್ರಾಯರವರಲ್ಲಿ ತಮ್ಮ ಪಕ್ಷ ವಹಿಸಿ ವ್ಯವ

ಹರಿಸಬೇಕಾಗಿ ಕೊಟ್ಟ ಅನುಜ್ಞೆಯಂತೆ, ಇವರು ಆ ಕಾಲದಲ್ಲಿ ವಯೋವೃದ್ಧರೂ ಜ್ಞಾನವೃದ್ಧರೂ ಆಗಿದ್ದ ಶ್ರೀ। ಮಂಗಳೂರು ರಾಮಚಂದ್ರಯ್ಯನವರ ಬೋಧನೆ ಸಹಕಾರಗಳಿಂದ ಶ್ರೀ ಗುರುಗಳ ಕರ್ತವ್ಯವನ್ನು ಸಾಧಿಸಿಯೇ ಮುಗಿಸಿದರು. ಶ್ರೀ ಗುರುಗಳ ಪಕ್ಷವು ವಿಜಯಹೊಂದಿತು. ಮಾತ್ರವಲ್ಲದೆ ಔಪಚಾರಿಕವಾಗಿ ಪರಂಪರಾಗತವಾಗಿ ಬಂದಿದ್ದ "ಸರ್ವತಂತ್ರ ಸ್ವತಂತ್ರ" ಎಂಬಾ ವಿಶೇಷಣವು ಶ್ರೀ ಗುರುಗಳಿಗೆ ಶಾಶ್ವತವಾಗಿ ರಾಜಾಸ್ಥಾನದಿಂದಲೂ ಮನ್ನಣೆಯಿಂದ ದೃಢವಾಯಿತು.

ಧರ್ಮಕ್ಕೂ, ಶಿಕ್ಷಣಕ್ಕೂ ಗೂಢವಾದ ಸಂಬಂಧ ಇದೆ. ಆ ಸಂಬಂಧವು ಅವೆರಡರ ಪರಸ್ಪರ ವೃದ್ಧಿಗೂ, ಗತಿಗೂ, ಬಾಳಿಕೆಗೂ ಅವಶ್ಯಕವಾಗಿಯೇ ಇದೆ. ಆ ಸಂಬಂಧವು ಕಳಚಿ ಹೋದರೆ, ಅಥವಾ ಅದು ಸಮಂಜಸವಲ್ಲದುದಾದರೆ, ಅಲ್ಪವಾವುದು ಮಹತ್ತಾವುದು ಎಂದು ಯಾವುದೊಂದು ಸಂಭವ ಅಥವಾ ವಿದ್ಯಮಾನಗಳ ಬೆಲೆ ಕಟ್ಟುವುದು ಕಷ್ಟವಾಗಿ, ಸಮಾಜಕ್ಕೆ ಘೋರವಾದ ಸಂಕಟವು ಉಂಟಾಗುವುದು. ಅದುಕಾರಣ, ನಮ್ಮ ಕಥಾನಾಯಕರಿಗೆ ಮೇಲೆ ಹೇಳಿರುವ ಮೊಕದ್ದಮೆಯ ನಂತರದಲ್ಲಿ, ಸಮಾಜದ ಅಭ್ಯುದಯವನ್ನು ಧರ್ಮಸಮ್ಮತವಾದ



ಶಿಕ್ಷಣ ಮತ್ತು ಶಿಕ್ಷಣ ಸಮ್ಮತವಾದ ಧರ್ಮಗಳ ಮೂಲಕ ಸಾಧಿಸಬೇಕೆಂದು ಅಭಿಮಾನ ಉಂಟಾಯಿತು.

ಸಮಾಜದ ಅಭ್ಯುದಯ ಸಾಧನೆಗೆ ಯೋಗ್ಯ ಸಾಧನವಾಗಿ, ೧೮೯೧ನೇ ಇಸವಿಯಲ್ಲಿ ಮಂಗಳೂರಲ್ಲಿ ಕೆನರಾ ಹೈಸ್ಕೂಲ್ ಎಂಬ ಪ್ರೌಢ ವಿದ್ಯಾಲಯವು ಯಥಾಕಾಲದಲ್ಲಿ ಸ್ಥಾಪನೆಹೊಂದಿತೆನ್ನಬಹುದು. ಸ್ವಜಾತಿ ಗೃಹಸ್ಥರಲ್ಲಿ ಶ್ರೀ। ಸುಬ್ಬರಾವ-ಗೋಪಾಲರಾವರುಗಳ ಮಾದರಿಯನ್ನು ಅನುಸರಿಸಿ ಮದ್ರಾಸಿಗೆ ತೆರಳಿ ಉತ್ತಮ ವಿದ್ಯಾಭ್ಯಾಸಮಾಡಿ ಹಿಂತೆರಳಿದ ಯುವಕರು ಯೋಗ್ಯ ಉದ್ಯೋಗ ಸಿಗದೆ ಅಥವಾ ಗೌರವ ಪಡೆಯದೆ ನಿರಾಶರೂ ಹತಾಶರೂ ಆಗುತ್ತ ಬರುವ ದುಷ್ಪರಿಣಾಮಗಳೂ ಕಣ್ಣಮುಂದೆ ಇರುವಾಗ, ಸಮಾಜೋದ್ಧಾರಕ್ಕೆ ಧರ್ಮಸಮ್ಮತವಾದ ಆಧುನಿಕ ಶಿಕ್ಷಣವನ್ನು ಅಗತ್ಯವಾಗಿಯೂ ಪ್ರಚಾರಕ್ಕೆ ತರಬೇಕಾಗಿದೆ ಎಂದು ನಮ್ಮ ಕಥಾನಾಯಕರು ನಿರ್ಧರಿಸಿದಾಗ, ಶ್ರೀ। ಧರ್ಮಗುರುಗಳ ಯೋಗ್ಯಬೆಂಬಲವೂ, ಶ್ರೀ। ಬಂಟ್ವಾಳ ಪದ್ಮನಾಭ ಬಾಳಿಗರು, ಶ್ರೀ। ಅರ್ಕುಳ ವಾಸುದೇವರಾಯರು ಮೊದಲಾದ ಹಲವು ಸುಶಿಕ್ಷಿತ ಯುವಕರ ಪ್ರಯತ್ನವೂ ಸ್ವಜಾತಿ ಗೃಹಸ್ಥರಲ್ಲಿ ಮುಖಂಡರೊಳಗೆ ಕೆಲವರ ಸಹಕಾರವೂ ಇವರಿಗೆ ದೊರೆತು, ಈ ಹೈಸ್ಕೂಲು ಸಂಸ್ಥಾಪನೆಹೊಂದಿತು. ತಮ್ಮ ಜೀವಾಂತ್ಯದ ವರೆಗೆ ಈ

ಶಾಲೆಯ ಆಡಳಿತ ಸಭಾಧ್ಯಕ್ಷರಾಗಿದ್ದು, ಆಗ ಸ್ವಕೀಯ-ಪರಕೀಯರ ಕೈಯಿಂದ ಹೊರಟ ಅಸ್ತ್ರಗಳು ಈ ಶಾಲಾ ಶಿಶುವಿಗೆ ತಗುಲದಂತೆ ಅವನ್ನು ನಿರೋಧಿಸಿ ಕತ್ತರಿಸಿ, ಅದು ಶಾಶ್ವತವಾಗಿ ಜೀವಿಸುವ ಹಾಗೆ ಇವರ ದೃಢಪ್ರಯತ್ನಗಳು ನಡೆದುವು. ಶಾಲೆಗೆ ಬೇಕಾಗುವ ಹಲವು ವಿಧಗಳ ಸೊತ್ತನ್ನು ಸಂಗ್ರಹಿಸಿಯೂ, ವಿದ್ಯಾರ್ಥಿಗಳಲ್ಲಿ ಹೆಚ್ಚಿನ ಬಡವರಿಗೆ ದ್ರವ್ಯಸಹಾಯ ಮಾಡಿಯೂ, ಕೇವಲ ಸಮಾಜ ಸೇವಾಕಾಂಕ್ಷೆಯಿಂದ ತ್ಯಾಗಿಗಳಾಗಿ ಕೆಲಸಮಾಡುತ್ತಿದ್ದ ಉಪಾಧ್ಯಾಯರನ್ನು ವಾತ್ಸಲ್ಯದಿಂದ ಪಾಲಿಸಿಯೂ, ಶಾಲೆಯ ಬಾಲ್ಯಕಾಲದಲ್ಲಿ ಇವರು ಪಟ್ಟ ಪರಿಶ್ರಮ ಫಲವೇ ಇಂದಿನ ವರೆಗೂ ಶಾಲೆಗೆ ಬೆಂಬಲವಾಗಿ ನಿಂತಿದೆ. ಸಂಸ್ಕೃತಶಿಕ್ಷಣಕ್ಕೆ ಅಂದಿನಿಂದಲೂ ಇದುವರೆಗೆ ಪ್ರೋತ್ಸಾಹ ದೊರೆತುದೂ, ಸ್ಥಾಪಕರಲ್ಲಿದ್ದ ಕಲಾಪ್ರೇಮವೇ ಪ್ರತಿಬಿಂಬಿಸುವಂತೆ ಶ್ರೀ। ಪಾವಂಜೆ ಗೋಪಾಲಕೃಷ್ಣಯ್ಯನವರಂತಹ ಕಲಾಭಿಜ್ಞರನ್ನು ಈ ಶಾಲೆಯಲ್ಲೇ ಉದ್ಯೋಗಕ್ಕೆ ನೇಮಿಸಿಕೊಂಡುದೂ, ಸ್ಥಾಪಕರಲ್ಲಿದ್ದ ಆಧುನಿಕತೆಯು ಸರ್ವವಿಧಗಳಲ್ಲೂ ಈ ಶಾಲೆಯಲ್ಲಿ ಯಾವಾಗಲೂ ಅನುಕೂಲತೆಗೆ ತಕ್ಕಂತೆ ಸ್ವೀಕೃತವಾದುದೂ, ಅವರ ಧರ್ಮ-ಶಿಕ್ಷಣಗಳ ಕಡೆಗೆ ಇದ್ದ ಅಭಿಮಾನವನ್ನೂ, ನಿರ್ಮಲಾಭಿಪ್ರಾಯವನ್ನೂ ಸೂಚಿಸುತ್ತಿದೆ. ಧರ್ಮಾರ್ಥವಾಗಿ ವಿದ್ಯಾದಾನ



ಮಾಡುವ ಬಾಲಿಕೆಯರ ಶಾಲೆಯೊಂದು ಕೆಲ ವರ್ಷಗಳಲ್ಲಿ ಸ್ಥಾಪನೆಹೊಂದಿತು. ಅಭ್ಯುದಯ ರಥಕ್ಕೆ ಅಗತ್ಯ ಅನುಕೂಲತೆಗಳಾಗಿರುವ ಎರಡು ಗಾಲಿಗಳೂ ಸಿದ್ಧವಾದುವು.

ಇವೆರಡು ಶಾಲೆಗಳು ಸ್ವಸಮಾಜಕ್ಕೋಸ್ಕರ ಎಂದೇ ಸ್ಥಾಪನೆಹೊಂದಿದ್ದರೂ, ಯಾವತ್ತು ಸಮಾಜಗಳ ವಿದ್ಯಾರ್ಥಿಗಳಿಗೆ ಇಲ್ಲಿ ಶಿಕ್ಷಣ ಸಿಗುತ್ತಿದೆಯಲ್ಲದೆ, ವೇತನ ರಿಯಾಯತಿ ಮೊದಲಾದುವು ಎಲ್ಲರಿಗೂ ಸರಿಸಮಾನವಾಗಿ ಸಲ್ಲುತ್ತಿವೆ. ಬಾಲಿಕಾ ಶಾಲೆಯು ಈಗ ಸಂಪೂರ್ಣ ಹೈಯರ್ ಎಲಿಮೆಂಟರಿ ಶಾಲೆಯಾಗಿದೆ; ಹೈಸ್ಕೂಲಿನಲ್ಲಿ ಬಾಲಿಕೆಯರೂ ಹರಿಜನರೂ ಸಹ ಇರುವರು. ಮಾತ್ರವಲ್ಲದೆ, ಸದ್ಯಕ್ಕೆ ವಿದ್ಯಾರ್ಥಿಗಳ ಸಂಖ್ಯೆಯು ಸಾವಿರವಾಗಿದೆ.

ಸ್ವಜಾತಿಯವರಲ್ಲಿ ಹೆಚ್ಚಿನವರು ವರ್ತಕರಾಗಿದ್ದು ಜೀವನಮಾಡುವ ಪಾರಂಪರ್ಯದವರಾಗಿರುತ್ತಾ, ಅವರಿಗೆ ವ್ಯವಹಾರಸೌಕರ್ಯವು ಸುಲಭವಾಗಿ ದೊರೆವಂತೆ ಅವರು ಇತರರಲ್ಲಿ ಮನೆಭಂಡಾರವನ್ನಿಟ್ಟು ಸಾಲವಾಗಿ ಹಣಪಡೆದು ನಾನಾಬಗೆಯ ಗೌರವ ಹಾನಿಗೆ ತುತ್ತಾಗುವ ಕಾರಣ ಇವರಿಗೆ ಯೋಗ್ಯವಾದ ರೀತಿಯಲ್ಲಿ ಅವರವರ ಸ್ಥಿತಿಗೆ ತಕ್ಕಂತೆ ಭಾಂಡವಳಿಕರ ಧನಸಹಾಯವು ದೊರೆತು ವ್ಯಾಪಾರಾಭಿವೃದ್ಧಿ ದೊರೆವಂತೆ ಮಾಡುವುದುತ್ತಮವೆಂದು ತಿಳಿದು, ೧೯೦೬ರಲ್ಲಿ 'ಕೆನರಾ ಹಿಂದು ಪರ್ಮೆನೆಂಟ್ ಫಂಡ್' ಎಂಬ

ಈಗಣ ಕೆನರಾ ಬೇಂಕ್ ಸಂಸ್ಥೆಯನ್ನು ಸ್ಥಾಪನೆಮಾಡಿದರು. ಕೆನರಾ ಹೈಸ್ಕೂಲ್, ಕೆನರಾ ಗರ್ಲ್ಸ್ ಸ್ಕೂಲ್ ಮತ್ತು ಪರವೂರ ವಿದ್ಯಾರ್ಥಿಗಳ ಬಗ್ಗೆ ಕೆನರಾ ಹೊಸ್ಟೆಲ್, ಕೆನರಾ ಬೇಂಕ್ ಎಂಬೀ ಸಂಸ್ಥೆಗಳೆಲ್ಲಕ್ಕೂ ಇಡೀ ಜಿಲ್ಲೆಯ ಹೆಸರನ್ನೆ ಕೊಟ್ಟಿರುವರಲ್ಲದೆ, ಸ್ವಗೃಹದ, ಸ್ವಕುಲದ, ಸ್ವಜಾತಿಯ, ಸ್ವಮತದ ಸೂಚನೆಯನ್ನುಳ್ಳ ಹೆಸರನ್ನು ಕೂಡ ಇವರು ಕೊಡದೆ, "ದೇವರು ಒಬ್ಬನೆ; ಎಲ್ಲ ಧರ್ಮಗಳೂ ಒಂದೇ; ಸಮಸ್ತ ಸಮಾಜಗಳೂ ಸಮಾನ" ಎಂದು ಮೊದಲೊಮ್ಮೆ ಇವರು ಬರೆದು ಪ್ರಕಟಿಸಿದ ತತ್ವವನ್ನು ಈ ಸಂಸ್ಥೆಗಳ ಹೆಸರುಗಳಲ್ಲಿ ಪ್ರತಿಪಾದಿಸಿರುವರು.

ಈ ಸಂಸ್ಥೆಗಳನ್ನು ರೂಢಿಸಿದ ಕ್ರಮ, ಸಮಾಜವು ಈ ಸಂಸ್ಥೆಗಳ ಮೂಲಕ ತನ್ನ ಬೆಳವಣಿಗೆಗೆ ಮುಟ್ಟಿದ ಕ್ರಮ ಮೊದಲಾದವನ್ನು ಹಲವು ಇತರ ಸಮಾಜಗಳವರೂ ತಿಳಿದು, ಇವೇ ಬಗೆಯ ಸಂಸ್ಥೆಗಳನ್ನು ಏರ್ಪಡಿಸಿಕೊಂಡು, ಅವುಗಳ ಯೋಗ್ಯ ಆಡಳಿತದ ಪರಿಣಾಮ ಫಲಗಳನ್ನು ಅನುಭವಿಸುವ ಹಾಗೆ ಈ ಮಹನೀಯರು ಆದರ್ಶಗಳನ್ನು ತೋರಿಸಿಕೊಟ್ಟಂತಾಯಿತು.

ಇಂತು ಸ್ವಪ್ರಾಂತ್ಯದಲ್ಲಿ ಸಾಮಾಜಿಕರು ಅಭ್ಯುದಯಕ್ಕೆ ಬರುತ್ತಿರುವ ಲಕ್ಷಣಗಳನ್ನು ಕಂಡ ಬಳಿಕ, ಸ್ವಸಮಾಜದ ಬಂಧುಬಾಂಧವರು ದೇಶದ ಇತರ ಕಡೆಗಳಲ್ಲೂ ಇರುವ



ಕಾರಣ, ಇವರದೊಂದು ಕುಟುಂಬವನ್ನೊಮ್ಮೆ ಕೂಡಿಸಿ, ಪರಸ್ಪರ ಸೌಹಾರ್ದಕ್ಕೆ ಎಡೆಮಾಡಿಕೊಡಬೇಕೆಂದು ಗೌಡ ಸಾರಸ್ವತ ಬ್ರಾಹ್ಮಣ ಪರಿಷತ್ತನ್ನು ೧೯೦೮ರಲ್ಲಿ ಮಂಗಳೂರಲ್ಲಿ ಕೂಡಿಸಿದರು. ಅದು ವಿಜಯಶೀಲವಾಯಿತು. ಪರಿಷತ್ತಿನಿಂದಾಗತಕ್ಕ ಸತ್ಫಲಗಳ ಅನುಭವವು ಅಗತ್ಯವೆಂದು ತೋರಿದಷ್ಟಕ್ಕೆ ಈ ಪರಿಷತ್ತು ಜರುಗಿತು. ಹಳೆಯ ರೂಢಿಯ ಪುರಾತನ ಕಟ್ಟುಗಳನ್ನು ಮೀರಿ ಈ ಕಾಲಕ್ಕೆ ತಕ್ಕಂತೆ ನಡೆಯುವುದು ಸಮ್ಮತವೆಂದ ಹಲವು ಗೃಹಸ್ಥರು ಇದೇ ಪರಿಷತ್ತಿನ ಪ್ರತಿಕೃತಿಯನ್ನು ಮಾಡಿಕೊಂಡು ಅದರಿಂದ ಸತ್ಫಲಗಳನ್ನು ಪ್ರಾಪ್ತಿಸಿಕೊಂಡರು. ಆದರೆ ಮೂಲತಃ ಇಂತಹ ಸಾಮಾಜಿಕ ಪರಿಷತ್ತುಗಳಿಗೆ ನಮ್ಮಲ್ಲಿ ಮುಖಂಡತನದಿಂದ ಮುಂದ್ದಾಗಿ ಬಂದು ನಡೆಯಿಸಿಕೊಟ್ಟವರು ಇವರೇ. ನಮ್ಮ ಜಿಲ್ಲೆಯ ಹಲವು ಇತರ ಸಮಾಜಗಳೂ ಈಗ ತಮ್ಮ ಪರಿಷತ್ತುಗಳ ಮೂಲಕ ಸಮಾಜಾಭ್ಯುದಯವನ್ನು ಸಾಧಿಸುತ್ತಿರುವ ರೀತಿಯನ್ನು ಕಲಿತುಕೊಳ್ಳುವುದಕ್ಕೂ ಇವರು ತೋರಿಸಿಕೊಟ್ಟ ರೀತಿಯೇ ಕಾರಣವಾಗಿದೆ.

ಬಾಲಕರಿಗೆ ವೇತನಸಹಾಯದಿಂದಲೂ ವಸತಿಗೃಹದಿಂದಲೂ ಸೇವಾಧುರಂಧರರಾದ ಬೋಧಕರಿಂದಲೂ, ಬಾಲಿಕೆಯರಿಗೆ ಧರ್ಮಾರ್ಥವಾಗಿಯೂ, ಶಿಕ್ಷಣ ದೊರೆವಂತಾಯಿತು. ಉದ್ಯೋಗಾದಿಗಳಿಗೆ ಭಾಂಡವಲಕ್ಕಾಗಿಯೂ

ಆತಂಕನಿವಾರಣೆಗಳಿಗಾಗಿಯೂ ಯೋಗ್ಯ ದ್ರವ್ಯಸಹಾಯಕ್ಕೊಂದು ನಿಧಿಯಾಯಿತು. ಸಮಸ್ತರ ಪರಿಚಯಮೂಲಕ ಬಾಂಧವ್ಯ ಬೆಳೆದು ಸಮಾಜೋನ್ನತಿಗೆ ಅಗತ್ಯಸಾಧನಗಳನ್ನು ಆಗಿಂದಾಗ ಮಾಡಿಕೊಳ್ಳಲು ಪರಿಷತ್ಕ್ರಮವಾಯಿತು. ಇದೆಲ್ಲವೂ ತನ್ನವರಿಗೇ ಅಲ್ಲದೆ ಸಮಸ್ತಸಮಾಜಗಳವರೂ ಅನುಕೂಲತೆ ತಿಳಿದು ವರ್ತಿಸಲು ಕ್ರಮಬೋಧನೆಗಾಯಿತು. ಇನ್ನೇನು? ಸಮಾಜವು ಯಾವ್ಯಾವ ಅಡಚಣೆಗಳ ಮೂಲಕ ಕುಂಠಿತವಾಗಿದ್ದಿತೋ ಅವನ್ನು ನಿವಾರಣೆಮಾಡಲು ಸಧ್ಯದಲ್ಲೇ ಮಾತ್ರವಲ್ಲದೆ ಮುಂದೆಯೂ ಸಾಧಿಸಲು ಸಮಾಜವು ಬಲಹೊಂದಿತು. ಸಮಾಜಕ್ಕೆ ಅದರ ಆತ್ಮಪರಿಚಯವುಂಟಾಯಿತು; ಆದರ್ಶ ತಿಳಿಯಿತು. ಇನ್ನೂ ಈ ಅವಹೇಳನಾಮಯ ಕಂಟಕಸಂಕಟಮಯವಾಗಿರುವ ಸಂಸಾರದಲ್ಲಿ ಪುರುಷೋತ್ತಮನಾದವನನ್ನು ಮತ್ತೂ ನರಳಿಸಬೇಕೆ? ಸುಗಮವಾದ ದಾರಿ ಕಡಿದುಕೊಟ್ಟು ದಾರಿಗರಿಗೆ ಸಕಲ ಸೌಕರ್ಯಗಳನ್ನು ಒದಗಿಸಿ, ಪಯಣವೆಲ್ಲಿಗೆಂದು ಬೋಧಿಸಿದ ಪಥಪ್ರದರ್ಶಕನು ಯಾತ್ರಿಕರಿರುವಷ್ಟು ಕಾಲಕ್ಕೆ ಮುಂದೆಯ ಕುರುಬನಂತೆ ಕಾಲುಹಾಕುತ್ತಾ ಮತ್ತೂ ದಣಿಯುತ್ತಿರಲಾರನು. ಅಥವಾ ಮುಂದೆ ಮುಖಂಡರು ನೇತೃತ್ವವನ್ನು ವಹಿಸಿಕೊಳ್ಳಲು ಕಲಿಯುವಂತೆ ಆದಿಗುರುವು ತನ್ನ ಸ್ಥಾನವನ್ನು ತ್ಯಜಿಸುವುದೂ ವಿಹಿತವೇ.



ಶ್ರೀ ಸುಬ್ರಾಯ ಪೈಯವರು ತನ್ನ ಜೀವಿತದ ಕೊನೆಯ ದಿನಗಳನ್ನು ತತ್ವವಿಚಾರದಲ್ಲಿಯೇ ಗಂಗಾನದೀ ತೀರದಲ್ಲಿ ತಿಂಗಳಿಗೆ ಹದಿನೈದು ರೂಪಾಯಿಗಳ ವ್ಯಯದೊಳಗೆ ಕಳೆಯುತ್ತಿರಬೇಕೆಂದು ಆಶಿಸಿದ್ದರು. ಕರ್ಮಯೋಗಿಯಾಗಿ ಬಾಳಿದವನು ಅದು ಮೂಲಕವೇ ಜ್ಞಾನಿಯೋಗಿಯಾಗಿ ಬೆಳೆದ ಬಳಿಕ, ಆತನಿಗೇಕೆ ಪುನಃ ಗಂಗಾತೀರವು? ಸಮಾಜೋನ್ನತಿಗೆ ಧರ್ಮ, ಅರ್ಥ, ಕಾಮ ಸಂಪಾದನೆಯಾಗುವಂತೆ ಲೋಕಪಾವನಕರವಾದ ಕರ್ಮಗಳ ಗಂಗಾಪ್ರವಾಹವನ್ನೇ ಹರಿಯಿಸಿದ ಭಗೀರಥನು ಪುನಃ ಯಾವ ತಪಸ್ಸನ್ನು ಮಾಡಿ, ಆತ್ಮಉದ್ಧಾರದಲ್ಲಿ ಯಾವ ಮೋಕ್ಷವನ್ನು ಪ್ರಾಪ್ತಿಸಿಕೊಳ್ಳಲು ಉಳಿದಿದೆ? ಇಪ್ಪತ್ತೈದು ವರ್ಷಗಳಿಂದಲೂ ಅವರನ್ನು ಆಗಾಗ ಬಾಧಿಸುತ್ತಲಿದ್ದ ವಾತವೇ ಅವರ ಜೀವಕ್ಕೆ ಘಾತವಾಯಿತೆಂಬಂತೆ ನಮಗೆ ತೋರಿದರೂ, ಪುಣ್ಯ ಪುರುಷನು ಇಹದಲ್ಲೇ ಜೀವನ್ಮುಕ್ತನಾಗುವ ಲೀಲೆಯು ತಿಳಿದುಬರುವಂತೆ, ಶ್ರೀಯುತರು ೧೯೦೯ರಲ್ಲಿಯೇ (ಜುಲೈ ೨೫ ರವಿವಾರದಂದು) ನಾರಾಯಣ ಸ್ಮರಣೆ ಮಾಡುತ್ತಲೆ, ದೇಹತ್ಯಾಗಮಾಡಿದರು. ಸ್ಮಶಾನಯಾತ್ರೆಯು ದಿವಂಗತರ ವೈಕುಂಠಯಾತ್ರೆಯಂತೆ ಮೆರೆಯಿತು. ಉದಾರಚರಿತರಿಗೆ ವಸುಧೆಯೆಲ್ಲ ಅವರ ಕುಟುಂಬದಂತಾಗುವುದು ಎಂಬುದಕ್ಕೆ ಅವರ ಕಳೇಬರದ ಮೆರವಣಿಗೆಯೆ ಸಾಕ್ಷಿಯಾಗಿದೆ. ಶರಣನ ಗುಣವನ್ನು ಮರಣದಲ್ಲಿ ನೋಡೆ

ಸ್ನುವುದು ಇದಕ್ಕಾಗಿಯೇ; ಮರಣದಿನವು ಜನ್ಮದಿನಕ್ಕಿಂತಲೂ
ಹೆಚ್ಚಿನದೆಂಬುದೂ ಇದರಿಂದ ವ್ಯಕ್ತವು. ಈ ಮಹನೀಯರ
ದೇಹತ್ಯಾಗವಾದ ಬಳಿಕ, ಅವರ ಕೀರ್ತಿಯು ಬಹಳವಾಗಿ
ವ್ಯಾಪಿಸಿತೆಂದು ಆ ಕಾಲದಲ್ಲಿ ಪ್ರಕಟಗೊಳ್ಳುತಿದ್ದ ಪತ್ರಿಕೆಗಳು
ಸ್ಪಷ್ಟಮಾಡಿವೆ. ದೂರದ ರಾಜಧಾನಿಯಾದ ಕಲ್ಕತ್ತಾದಲ್ಲಿ
ಪ್ರಕಟವಾದ 'ಇಂಡಿಯನ್ ಮೆಸೆಂಜರ್'' ಪತ್ರಿಕೆಯು ದಿವಂಗ
ತರ ಗುಣಕಥನದಿಂದ ತುಂಬಿದ್ದು, ಅವರ ಜೀವನದ ವಿಮರ್ಶೆ
ಯನ್ನು ಪ್ರಕಟಿಸಿತು! "ಪಶ್ಚಿಮತೀರದ ಕೆಲವು ಜಿಲ್ಲೆಗಳು
ಮಾತ್ರ ಈ ಮಹನೀಯರ ಹೆಸರನ್ನು ಕೇಳಿರಬಹುದಾದರೂ,
ಇಡೀ ದೇಶದ ಯಾವುದೊಂದು ಸತ್ಕಾರ್ಯಸಾಧಕ ಸಂಸ್ಥೆಯು
ಇವರಿಂದ ಸಹಾಯ ಅಥವಾ ಪ್ರೋತ್ಸಾಹಪಡೆಯದೆ ಇದ್ದಿಲ್ಲ.
ಗೃಹಜೀವನಕ್ಕೂ ಯುಕ್ತಿಯುಕ್ತವಾಗಿ ಪತ್ರಿಕೆಗಳಲ್ಲಿ
ಪ್ರಕಟವಾಗುತಿದ್ದ ವಿಷಯಗಳಿಗೂ ಯಾವ ಹೋಲಿಕೆಯೂ
ಇಲ್ಲದ ಎಷ್ಟೋ ಮಂದಿಯರ ಹೆಸರುಗಳು ಬಿರುದಾವಳಿ
ಗಳ ಆಡಂಬರದಿಂದ ಮೆರೆವಾಗ, ಈ ಮಹನೀಯರು
ಅಂತಃಚಕ್ಷುವಿಗೆ ಸಮ್ಮತವಾಗಿ, ಭಗವಂತನ ಆಶೀರ್ವಾ
ದಕ್ಕೆ ತಲೆಬಾಗಿ, ತೀರ ಗೋಪನದಲ್ಲೇ ಜನಹಿತವನ್ನೂ
ದೇಶಹಿತವನ್ನೂ ಸಾಧಿಸಿರುವರು. ಸ್ವಾರ್ಥ ಲೇಶವೂ ಇಲ್ಲದೆ,
ನಿಂದೆಯ ದುರ್ವಾಸನೆಯು ತಟ್ಟದೆ, ಬಹುಮುಖವಾಗಿ
ಕಾರ್ಯಸಾಧನೆ ಮಾಡುತ್ತಿರುವಾಗಲೂ ನಿರ್ಮಲ, ಶಾಂತ



ಉಜ್ವಲಚಿತ್ತವುಳ್ಳ ಇಂತಹರು ತೀರ ವಿರಳರು. ಇವ
ರನ್ನು ಬಿರುದುಗಳಿಂದ ಮೆರೆಯಿಸಲಿಲ್ಲ ನಿಜ. ಆದರೆ, ಇವರ
ನಿಧನದಿಂದ ದೇಶವು ಮಾತ್ರ ಬಡವಾಯಿತು."

ಅಪಾರವಾದ ಧನಾರ್ಜನೆಮಾಡುತ್ತಿದ್ದುದೆಲ್ಲವು ಇತ
ರರ ಸಹಾಯಕ್ಕೊದಗುವಂತೆ ಮಾಡಿದರಿಂದ (ಯಾವ
ನೊಬ್ಬನು ತನ್ನ ಮಕ್ಕಳ ಬರೇ ಆರು ತಿಂಗಳ ಆರೈಕೆಗೆ
ಬೇಕಾಗುವಷ್ಟು ಧನವನ್ನು ಕೂಡಿಸಿಟ್ಟರೆ ಮಾತ್ರ ಸಾಕೆಂದು
ಇವರು ಹೇಳುತ್ತಿದ್ದಂತೆ) ಸರ್ವ ಸಮಾಜಗಳಲ್ಲೂ ಇವರ
ಕಡೆಗೆ ವಾತ್ಸಲ್ಯವನ್ನಿಟ್ಟು ವರ್ತಿಸುವ ಸಾವಿರಾರು ಜನರು
ಈಗಲೂ ಇರುವರು. ದೊಡ್ಡ ಅಧಿಕಾರಿಗಳ ದರ್ಬಾರು
ಗಳಿಗೆ ಹೋಗುವುದು ಕಡಿಮೆಯಾಗಿದ್ದರೂ, ಬಡ ಅಡಿಗೇ
ಭಟ್ಟನಲ್ಲಿ ನಡೆದ ಉಪನಯನಕ್ಕಾಗಿ ಅನಾರೋಗ್ಯದಿಂದ
ಇದ್ದಾಗ ಸಹ ಅಗತ್ಯ ಹೋಗಿದ್ದರು. ದೀನದರಿದ್ರರಿಗೆ
ಇವರಲ್ಲಿ ಪ್ರೀತಿ ಬಹಳವಾಗಿದ್ದಿತು. ಎಂದೋ ಹಿಂದೆ
ಪಾಟಹೇಳಿಕೊಟ್ಟ ಗುರುಗಳನ್ನು ಮುಂದೆ ಕಂಡಾಗಲೆಲ್ಲ
ಇವರು ಸನ್ಮಾನಪೂರ್ವಕವಾಗಿ ನಮಸ್ಕರಿಸಿ, ಭಕ್ತಿಭರ
ದಿಂದ ನಡೆದುಕೊಳ್ಳುತ್ತಿದ್ದರು. ಇವರನ್ನು ಬಾಲ್ಯದಲ್ಲಿ
ಆರೈಕೆ ನೋಡಿದ ದಾದಿಯೊಬ್ಬಳಿಗೆ, ಜೀವಾಂತ್ಯದ ತನ
ಕವೂ ಇವರು ಧನಸಹಾಯ ಕಳಿಸುತ್ತಿದ್ದರು. ಪಾಶ್ಚಾತ್ಯ
ರಲ್ಲಿನ ಸದ್ಗುಣಗಳನ್ನೂ, ಗ್ರಂಥಗಳನ್ನೂ ಅಂಗೀಕರಿಸಿ

ದ್ದರೂ, ಅವರಲ್ಲಿನ ಪ್ರತಿಯೊಂದು ಪ್ರಕಾರದ ರೀತಿಯನ್ನು ಇವರು ಅನುಸರಿಸಿಲ್ಲ, ಅನುಸರಿಸುವುದರ ಹಾನಿಯನ್ನು ದೃಷ್ಟಾಂತಪೂರ್ವಕ ತಿಳಿಸುತ್ತಿದ್ದರು. ಅಂತೂ, ಅನ್ಯಾದೃಶವಾದ ಜೀವನ ರೀತಿಯನ್ನು ನಮ್ಮ ಮುಂದಿಟ್ಟು, ಇವರು ಅದೃಶ್ಯರಾದಂತಾಯಿತು. ಮತ್ತೊಬ್ಬರ ಸಂತೋಷದಲ್ಲಿ ನಿಷ್ಕಲಂಕಚಿತ್ತರಾಗಿ ಉಲ್ಲಾಸಗೊಳ್ಳುತ್ತಿದ್ದುದು ಇವರ ಅಪೂರ್ವ ಗುಣಗಳಲ್ಲಿ ಮುಖ್ಯವಾದುದೊಂದು. ಇವರಿಂದ ಸಹಾಯಪಟ್ಟವರ ಸಂಖ್ಯೆ ಅಪಾರ. ಆದುದರಿಂದ ಇವರ ಸ್ಮಾರಕನಿಧಿಯೊಂದು ಲವಲವಿಕೆಯಿಂದ ಸಂಗ್ರಹವಾಯಿತು. ಸ್ವಜಾತಿಯ ಬಡವರು ವಿದ್ಯಾಸಕ್ತರಾಗಿರುವಲ್ಲಿ, ಅವರಿಗೆ ಮುಂದಣ ಉತ್ತಮ ವಿದ್ಯಾಲಾಭಕ್ಕೆ ಸಹಾಯವಾಗಿ ಈ ನಿಧಿಯಿಂದ ಹಣವು ಸಾಲವಾಗಿ ತೆರುವಂತಾಗಿದೆ. ಇದುವರೆಗೆ ನೂರಾರು ಪ್ರೌಢ ವಿದ್ಯಾರ್ಥಿಗಳು ಬರೇ ಸಾಹಿತ್ಯಮಾರ್ಗವನ್ನಲ್ಲದೆ, ಇತರ ಕಸುಬು ನೌಕರಿವೃತ್ತಿಗಳಿಗೆ ಉಪಯುಕ್ತವಾದ ಉಚ್ಚ ಶಿಕ್ಷಣವನ್ನು ಈ ನಿಧಿಯ ಮೂಲಕ ಪಡೆದು ತಮ್ಮ ಕುಟುಂಬಗಳನ್ನು ಒಳ್ಳೇ ರೀತಿಯ ಗೌರವದಲ್ಲಿ ಕಾಪಾಡಿಕೊಂಡು ಬರುವಂತಾಗಿದೆ.

'ಒಬ್ಬನಿದ್ದನು; ಆತನಿಗೆ ಎಣೆಯಾದ ಮತ್ತೊಬ್ಬನು ಈ ಜನ್ಮದಲ್ಲಿ ಇನ್ನೆಂದು ಸಿಗುವನು?'

* * * * *



"ಕವಿಯ ಪರಿಚಯವನ್ನು ಕಾವ್ಯದಲ್ಲಿ ಕಾಣುವಂತೆ, ಇವರು ಸಂಸ್ಥಾಪಿಸಿರುವ ಕೆನರಾ ಹೈಸ್ಕೂಲ್‌ನಲ್ಲಿ ಇವರ ಆತ್ಮದ ಪರಿಚಯವನ್ನು ಸರ್ವರೂ ತಿಳಿದುಕೊಳ್ಳುವ ಹಾಗೆ, ಆ ಸಂಸ್ಥೆಯು ಇವೆ ನಲ್ವತ್ತಮೂರು ವರ್ಷಗಳಿಂದಲೂ ಪ್ರತಿದಿನ ಸಿದ್ಧಗೊಳ್ಳುತ್ತ ಬರುತ್ತಲಿದೆ. ಇವರು ಜೀವಿತಕಾಲದಲ್ಲಿ ಏನನ್ನು ಆಶಿಸಿದ್ದರು, ಇವರ ಆದರ್ಶವೇನಾಗಿದ್ದಿತು ಎಂಬುದನ್ನು, ಹಿಂದೆ ರಾಜರುಗಳು ಶಿಲಾಲಿಪಿ, ತಾಮ್ರಶಾಸನಾದಿಗಳ ಮೂಲಕ ಶ್ರುತಪಡಿಸಿ ಇಡುತ್ತಿದ್ದಂತೆ, ಇವರೂ ತಮ್ಮ ಜೀವನದ ವಿಜಯಸೂಚನೆಯನ್ನು ಇದೊಂದು ಸಂಸ್ಥೆಯಲ್ಲಿ ಅಂಕಿಸಿಟ್ಟಿರುವರು. ನಗರದ ಜನನಿಬಿಡವಾದ ಅಂಶಕ್ಕೆ ಸಮೀಪವಾಗಿದ್ದರೂ, ತನ್ನೊಳಗೆ ತಾನೆ ದೂರವಾಗಿದ್ದು, ಉದಾರವಾದ ಆಕಾಶದ ಛಾಯೆಯಲ್ಲಿ, ಋತುಗಳಲ್ಲೆಲ್ಲ ನೂತನವಾಗಿ ಕಾಣುವ ಕ್ಷೇತ್ರದ ವಿಸ್ತೀರ್ಣದಲ್ಲಿ, ಇನ್ನೂ ಇನ್ನೂ ಅಭ್ಯುದಯಗೊಳ್ಳುತಲಿದ್ದು, ಆತ್ಮಪ್ರಕಾಶವನ್ನು ಬೆಳಗಿಸಿ, ತನ್ನ ಪ್ರತಿಭೆಯನ್ನು ಪ್ರಾಂತ್ಯದಲ್ಲೆಲ್ಲ ಬೀರುತ್ತಿರುವ. ಈ ವಿದ್ಯಾಸಂಸ್ಥೆಯು ಅಬಾಧ, ಉದಾರ, ಅಕ್ಷರವಾಗಿರುವ ಇವರ ಜೀವನದ ಸಂಕೇತವಲ್ಲದೆ ಮತ್ತೇನು? ಇವರು ಎಷ್ಟೋ ಸಭಾಸಮಿತಿಗಳನ್ನು ಆಯಾ ಕಾಲಗಳಲ್ಲಿ ಅಧ್ಯಕ್ಷರಾಗಿ ನಡೆಸಿ ಬಂದಿರುವರು; ಎಷ್ಟೋ ಬಗೆಯ ಬೋಧನೆ ಕೊಟ್ಟಿರುವರು; ವಿವಿಧ ಕಲಾ ಉಪಾಸಕರ ಪ್ರೋತ್ಸಾಹಕ್ಕೂ

ನಾನಾ ಸಮಾಜಗಳ ಕರ್ತವ್ಯಗಳು ಸಾಂಗವಾಗಿ ಪೂರಯಿಸಿ ಬರುವುದಕ್ಕೂ ಸಹಾಯಮಾಡಿರುವರು. ಆದರೆ, ಯಾವು ದೊಂದು ಮರದಿಂದ ಎಂತೆಂತಹ ವಸ್ತುಗಳನ್ನು ತಯಾರಿಸ ಬರುವುದಾದರೂ, ಆ ಮರದ ಹೂ ಹಣ್ಣುಗಳೇ ಮಾತ್ರ ಅದರ ಸಂಪೂರ್ಣ ಪೃಥಕತೆಯನ್ನು ಸೂಚಿಸುವ ಹಾಗೆಯೆ, ಈ ಮಹನೀಯರ ಜೀವನದಲ್ಲಿನ ಅನೇಕ ವಿಭಿನ್ನ ಕಾರ್ಯ ಗಳಿಂದ ಈ ವಿದ್ಯಾಸಂಸ್ಥೆಯೊಂದು ಪ್ರತ್ಯೇಕವಾದ ವಿಶಿಷ್ಟತೆ ಯನ್ನು ತಳೆದಿದೆ. ಇವರ ಜೀವನದ ನಡುವಣಿಂದ ಒಂದು ಮೂರ್ತಿಯು ತಾನಾಗಿ ಹುಟ್ಟಿ ಬಂದಂತೆ, ಒಂದು ಬಗೆಯ ಸೌಂದರ್ಯ ಒಂದು ವಿಧದ ಸಂಪೂರ್ಣತೆಯುಳ್ಳುದಾಗಿ, ಅದುಕಾರಣವೇ ಬೇರೇ ಒಂದು ಸುಧಾಗಂಧವನ್ನೂ, ಮಧು ಸಂಚಯವನ್ನೂ ಕೂಡಿದುದಾಗಿ ಈ ಶಾಲಾಪುಷ್ಪವು ರಾರಾ ಜಿಸುತ್ತಿದೆ. ವಿಶ್ವಪ್ರಕೃತಿಯೂ, ಮಾನವಚಿತ್ತವೂ ಒಂದು ಗೂಡಿ, ಸಮಾಜಾಭ್ಯುದಯಕ್ಕೂ ಲೋಕಹಿತಕ್ಕೂ ಒಪ್ಪಿಸ ಬಹುದಾಗಿರುವ ಪುಷ್ಪಾಂಜಲಿಯಲ್ಲಿ ಈ ಸಂಸ್ಥೆಯು ಒಂದು ಹೂ; ಇವರ ಜೀವನದ ಕುಸುಮ.

'ಪ್ರತಿಯೊಂದು ಜಾತಿಯೂ ತನ್ನ ಸಭ್ಯತೆಯ ಮೂಲಕ ವಾಗಿ ತನ್ನ ಶ್ರೇಷ್ಟಪುರುಷನನ್ನು ಪಡೆಯಲು ಪ್ರಾರ್ಥಿಸಿ ಕೊಳ್ಳುವುದು. ಮರಗಳ ಕಾಂಡ, ಶಾಖೆ, ಬೇರು, ಕುಡಿ, ಎಲೆ, ಕಡ್ಡಿ ಎಲ್ಲವೂ ಒಂದೇ ಪ್ರಯತ್ನದಲ್ಲಿ ನಿರತವಾಗಿವೆ,



ತಮ್ಮ ಫಲದೊಳಗೆ ಇವೆಲ್ಲವುಗಳ ಸತ್ವವನ್ನೊಳಗೊಂಡರೂ ತಮ್ಮೆಲ್ಲವಕ್ಕಿಂತ ಮಿಗಿಲಾದ ಬೀಜವೊಂದು ಜನ್ಮಿಸಲೆಂದೇ ಈ ಪ್ರಯತ್ನ; ತಮ್ಮ ಶಕ್ತಿಯು ಎಷ್ಟು ದೂರ ಪರಿಣತಿ ಹೊಂದಬಹುದೋ ಅಷ್ಟು ದೂರ ಅಷ್ಟು ಚೆನ್ನಾಗಿ ಪರಿಣತಿಯ ಶಕ್ತಿಯನ್ನುಳ್ಳ ಬೀಜವೊಂದು ತಮ್ಮಲ್ಲಿ ಹುಟ್ಟಲಿ ಎಂದೇ ಅವುಗಳ ಪ್ರಯಾಸ. ಅದರಂತೆಯೆ, ಮನುಷ್ಯ ಸಮಾಜವೂ ತನ್ನ ಶಕ್ತಿಯ ಚರಮಪರಿಣತಿಯನ್ನು ಪ್ರತ್ಯಕ್ಷ ವಾಗಿಡಲು ಆಶಿಸಿಯೇ ಇರುವುದು. ಆದರೆ, ಇಂತಹ ಚರಮ ಪರಿಣತಿಯು ಯಾವುದು, ಹೇಗಿರಬೇಕು, ಎಂಬುದನ್ನು ಮಾತ್ರ ಯಾವ ಸಮಾಜವೂ ವಿವರಿಸಿ ಹೇಳಲಾರದು; ಕೆಲವು ಸಮಾ ಜಗಳು ಈ ಮಹಾಶಕ್ತಿಸ್ವರೂಪನನ್ನು ಉಜ್ವಲವಾಗಿಯೂ, ಕೆಲವು ಅಸ್ಪಷ್ಟವಾಗಿಯೂ ಬಣ್ಣಿಸಬಹುದು. ಬಾಹುಬಲ, ಬುದ್ಧಿಚಾತುರ್ಯ, ಚಾರಿತ್ರನೀತಿ, ಇವುಗಳೇ ಒಂದೊಂದು ಸಮಾಜದಲ್ಲಿ ಅದರದರ ಪುರುಷೋತ್ತಮನ ಪ್ರಾಮುಖ್ಯ ಲಕ್ಷಣಗಳಾಗಿ ಎಣಿಕೆಗೆ ಬರುವುದುಂಟು. ಅಂತಹ ಲಕ್ಷ ಣದ ಕಡೆಗೆ ಲಕ್ಷ್ಯವನ್ನಿಟ್ಟು ಆಯಾ ಸಮಾಜವು ಸಾಧಿಸಿ ಜೀವಿಸುವುದುಂಟು. ಪೂರ್ಣಶಕ್ತಿಯುಳ್ಳ ಮನುಷ್ಯನನ್ನು, ಅಥವಾ ಮನುಷ್ಯನ ಪೂರ್ಣ ಶಕ್ತಿಯನ್ನು ಸಮಾಜವು ಪ್ರಾರ್ಥಿಸಿಕೊಂಡರೆ, ಮನಸ್ಸಿನಲ್ಲೇ ಅಂತಹನ ಚಿತ್ರವೊಂದನ್ನು ಕಲ್ಪಿಸಿಕೊಂಡರೆ, ಆತನೇ ಆದರ್ಶ ಪುರುಷನಾಗಬೇಕೆಂದು

ಚಿಂತಿಸುತ್ತಿದ್ದರೆ, ಆ ನರಶ್ರೇಷ್ಠನು ಎಂತಹನಾಗಬೇಕೆಂದು ಭಾರತವಾಸಿಯರು ಹಿಂದೆಯೇ ನಿರ್ಧರಿಸಿದ್ದರೋ, ಆತನ ವಿಷಯವಾಗಿ ಅವರು ಹೀಗೆ ಹಾಡಿರುವರು:—

ಸಂಪ್ರಾಪ್ಯೈನಮ್ ಋಷಯೋ ಜ್ಞಾನತೃಪ್ತಾಃ ।
ಕೃತಾತ್ಮಾನೋ ವೀತರಾಗಾ ಪ್ರಶಾಂತಾಃ ॥
ತೇ ಸರ್ವಗಂ ಸರ್ವತಃ ಪ್ರಾಪ್ಯ ಧೀರಾ ।
ಯುಕ್ತಾತ್ಮಾನಃ ಸರ್ವಮೇವಾ ವಿಶನ್ತಿ ॥

ಆತನು ಋಷಿ; ಪರಮಾತ್ಮನನ್ನು ಜ್ಞಾನಮೂಲಕ ತಿಳಿದುಕೊಂಡು ಜ್ಞಾನತೃಪ್ತನಾದವನು, ಆತ್ಮದೊಳಗೆ ಪಡೆದುಕೊಂಡು ಕೃತಾತ್ಮನಾದವನು, ಹೃದಯದೊಳಗೆ ಉಪಲಬ್ಧಿ ಹೊಂದಿ ವೀತರಾಗನಾದವನು, ಸಂಸಾರದೊಳಗೆ ಕರ್ಮಕ್ಷೇತ್ರದಲ್ಲಿ ಕಂಡು ಪ್ರಶಾನ್ತನಾದವನು.—ಮಾತ್ರವಲ್ಲ. ಪರಮಾತ್ಮನನ್ನು ಸರ್ವತ್ರದಿಂದಲೂ ಪ್ರಾಪ್ತೀಕರಿಸಿಕೊಂಡು ಧೀರನಾಗಿದ್ದು, ಸಕಲರೊಡನೆ ಯುಕ್ತನಾಗಿ, ಸಕಲದಲ್ಲೂ ಪ್ರವೇಶ ಹೊಂದಿದವನೇ ಋಷಿ. ಈ ಋಷಿಯು, ಧನಿಯಲ್ಲ, ಭೋಗಿಯಲ್ಲ, ಪ್ರತಾಪಶಾಲಿಯಲ್ಲ,–ಆತನು ಧೀರನು, ಯುಕ್ತಾತ್ಮನು!

ಧನಿಯಾಗಿ ಸ್ವತಂತ್ರನಾಗಿ ತನ್ನನ್ನೆ ಸಮಸ್ತರ ಮೇಲೂ ಬೆಳೆಯಿಸಿಕೊಂಡು ಬದುಕಲೆಳಸಿರುವವನೇ ಮಾತ್ರ ಆದರ್ಶ ಪುರುಷನಲ್ಲ; ಸಮಸ್ತರನ್ನೂ ತನ್ನವರನ್ನಾಗಿ ಮಾಡಿಕೊಂಡರೆ



ಮಾತ್ರ ಆತನು ಆದರ್ಶನು ಹೊರತಾಗಿ, ಜ್ಞಾನಿಯೆಂದು, ಶಕ್ತಿವಂತನೆಂದು ಆತನು ಎಲ್ಲ ಕಡೆಗೂ ಅಧಿಕಾರಪಡೆಯಲಾರನು. ಆತ್ಮದ ಅಧಿಕಾರಕ್ಕೆ ಮಾತ್ರ ಮೇರೆಯೇ ಇಲ್ಲ. ಮನುಷ್ಯಶ್ರೇಷ್ಠನು ಮಾತ್ರ,–"ಯಾವನಾದರೂ ಕೀಳಾಗಿರಲಿ ಮೇಲಾಗಿರಲಿ, ಚಿಕ್ಕವನಿರಲಿ ದೊಡ್ಡವನಿರಲಿ, ಉಚ್ಚನಾಗಿರಲಿ ನೀಚನಾಗಿರಲಿ, ಶತ್ರುವಾಗಿರಲಿ ಮಿತ್ರನಾಗಿರಲಿ. ಪ್ರತಿಯೊಬ್ಬನೂ ನನಗೆ ನನ್ನವನೇ" ಎಂದು ಸಾರಬಲ್ಲನು.

ಇಂತಹ ಸರ್ವಾನುಭೂತಿಯೆ ಪುರುಷೋತ್ತಮನ ಲಕ್ಷಣವು; ಅನುಭೂತಿಯು ವ್ಯಾಪಿಸಿರುವಷ್ಟಕ್ಕೆ ಅವನ ಅಧಿಕಾರವೂ ವ್ಯಾಪಿಸುವುದು. ಆದರೆ, ಅನುಭೂತಿಯನ್ನು ಲಭಿಸಿಕೊಳ್ಳಬೇಕಾದರೆ, ಅದಕ್ಕೊಂದು ಬೆಲೆಕೊಡದೆ ಆಗುವುದೇ? ತನ್ನನ್ನೇ ಕೊಟ್ಟು, ಸಮಸ್ತವನ್ನು ಪಡೆಯಬೇಕು. ಇದು ಕಾರಣವೇ ಮಹಾಪುರುಷರು ತ್ಯಾಗಶಾಲಿಗಳು. 'ತ್ಯಕ್ತೇನ ಭುಂಜೀಥಾಃ' ತ್ಯಾಗವೇ ಅವರ ಭೋಗವಾಗುವುದು; 'ಮಾ ಗೃಧಃ' ಅವರಲ್ಲಿ ಲೋಭವಿರಲಾರದು. ಪರಿವಾರಕ್ಕಿಂತ ಸಮಾಜದಲ್ಲಿ, ಸಮಾಜಕ್ಕಿಂತ ಸ್ವದೇಶದಲ್ಲಿ ಅವರ ಆತ್ಮವು ವ್ಯಾಪಿಸಿಕೊಂಡು ತ್ಯಾಗಶಾಲಿಗಳಾಗಿ ಅವರು ವೀತರಾಗರೆನಿಸುವರು. ಹೀಗಾಗಿಯೇ ಅವರು ಜಗದ್ಬಂಧುಗಳಾಗಿ, ಅಮೃತತ್ವವನ್ನು ಪಡೆಯುವರು.

ಹೀಗೆ ಅಮೃತತ್ವವನ್ನು ಪಡೆದಿರುವ ಮಹನೀಯರ ಸಾಧನೆಯ ಉತ್ತರಾಧಿಕಾರಿಗಳಾಗಿ ಬಾಳುತ್ತಿರುವ ನಮ್ಮ ಸಾಮಾಜಿಕರಲ್ಲಿ ಅವರ ಜೀವನದ ತತ್ವಗಳ ಸ್ಮರಣೆಯು ನಿತ್ಯವೂ ಉಂಟಾಗುವ ಹಾಗೆ, ಅವರ ಕೃತಿಗಳ ಮಂದಿರಗಳೂ, ಭವನಗಳೂ, ಸಂಸ್ಥೆಗಳೂ ನಮ್ಮ ಮುಂದೆ ಇರುವುವಾದರೂ, ಅವರ ಆತ್ಮವು ಯಾವ ಸ್ವರೂಪವನ್ನುಳ್ಳ ದೇಹದಲ್ಲಿ ನೆಲೆಮಾಡಿಕೊಂಡು ಜನ್ಮಕರ್ಮಗಳನ್ನು ಸಾಧಿಸಿತೋ, ಆ ಸ್ವರೂಪದ ಪ್ರತಿಕೃತಿಯೊಂದನ್ನು ಇಂದು ನಮ್ಮ ಮುಂದೆ ಪ್ರತಿಷ್ಠಿಸಲಾಗಿದೆ. ಅವರ ವಿಗ್ರಹಕ್ಕೂ ಮನೋಭಾವನೆಗಳಿಗೂ ಯಾವ ಸಂಬಂಧವಿದ್ದಿತ್ತೋ ಅದೇ ಸಂಬಂಧವು, ಅವರ ಮೂರ್ತಿಗೂ, ಈ ವಿದ್ಯಾಸಂಸ್ಥೆಗೂ ಇರುವುದಾಗಿ ಹೇಳಿದರೆ ಅಸಮಂಜಸವಾಗಲಾರದು. ಮನುಷ್ಯತ್ವದ ಬೃಹತ್ಕ್ಷೇತ್ರವಾವುದು? ನಿರರ್ಥಕ ಆಚಾರಗಳನ್ನು ಮನ್ನಿಸಿ, ಪಡೆದ ವಿಚಿತ್ರ ಶಕ್ತಿಯನ್ನು ಉದಾರಭಾವದಿಂದ ನಾವು ಹೇಗೆ ಪ್ರಚುರಗೊಳಿಸಬಹುದು? ಸಂಕೀರ್ಣವಾಗುತ್ತ ಬರುವ ಚಿತ್ತವನ್ನು, ಆಶೆಗಳನ್ನು, ವಿಶ್ವಾಸಗಳನ್ನು, ಬಾಂಧವ್ಯವನ್ನು, ಶ್ರದ್ಧೆ-ಸಾಧನೆ-ಶಕ್ತಿ-ಆನಂದಗಳನ್ನು ಹೇಗೆ ವಿಶಾಲಗೊಳಿಸಬಹುದು? ಎಂಬುವ ಪ್ರಶ್ನೆಗಳಿಗೆ ಈ ಪ್ರಸ್ತರ ಮೂರ್ತಿಯು ನಮಗೆ ಸರ್ವದಾ ಉತ್ತರಕೊಡುತ್ತಲಿರಲಿ.

ಕೆನರಾ ಹೈಸ್ಕೂಲ್, ಮಂಗಳೂರು. ೩೧-೩-೩೪.



# A GREAT MAN

"He alone is worthy of the appellation who either does great things or teaches how they may be done or describes them with a suitable majesty when they have been done; they only are great things which tend to make life happy, which increase the innocent enjoyments and comforts of existence, or which pave the way to a state of future bliss more permanent and more pure"

—**John Milton.**



